# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 575
2. ಮಾನ್ಯ ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 5/2/2021
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳಲ್ಲಿ ರಾಜ್ಯದಲ್ಲಿ ಮನೆ ಕೆಲಸಗಾರರ ಸಂಖ್ಯೆ ಅದರಲ್ಲೂ ಪಟ್ಟಣ ಮತ್ತು ನಗರ ಪ್ರದೇಶಗಳಲ್ಲಿ ಗಣನೀಯವಾಗಿ ಹೆಚ್ಚಳವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ (ಸಂಪೂರ್ಣ ವಿವರ ನೀಡುವುದು). | ರಾಜ್ಯದಲ್ಲಿ ಮನೆಗೆಲಸಗಾರರಿಗೆ ಸಂಬಂಧಿಸಿದಂತೆ, ಯಾವುದೇ ಸಮೀಕ್ಷೆಗಳಾಗಲೀ, ಗಣತಿಗಳಾಗಲೀ ಇದುವರೆಗೂ ನಡೆದಿರುವುದಿಲ್ಲ. ಆದ್ದರಿಂದ, ಮನೆಗೆಲಸಗಾರರ ಸಂಖ್ಯೆಯ ಕುರಿತು ನಿಖರ ಮಾಹಿತಿ ಲಭ್ಯವಿರುವುದಿಲ್ಲ. ಆದರೆ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆಯಡಿ ಮನೆಗೆಲಸದವರು ಸೇರಿದಂತೆ, ಒಟ್ಟು 11 ಅಸಂಘಟಿತ ವರ್ಗಗಳ ಕಾರ್ಮಿಕರನ್ನು ನೊಂದಾಯಿಸಿ ಸ್ಮಾರ್ಟ್‌ಕಾರ್ಡ್ ವಿತರಿಸಲಾಗುತ್ತಿದೆ.<br><br>ಸದರಿ ಯೋಜನೆಯಡಿ ಈವರೆಗೆ ರಾಜ್ಯದಾದ್ಯಂತ 25,966 ಗೃಹ ಕಾರ್ಮಿಕರನ್ನು ನೊಂದಾಯಿಸಲಾಗಿದೆ. |
| ಆ. | ಈ ಮನೆ ಕೆಲಸಗಾರರ ಮಕ್ಕಳ ಆರೈಕೆಗಾಗಿ ರಾಜ್ಯ ಸರ್ಕಾರ ಸಹಾಯ ಧನವನ್ನು ನೀಡುತ್ತಿದೆಯೇ; (ಸಂಪೂರ್ಣ ಮಾಹಿತಿ ನಿಡುವುದು). | ಮನೆ ಕೆಲಸಗಾರರ ಮಕ್ಕಳ ಆರೈಕೆಗಾಗಿ ಧನ ಸಹಾಯವನ್ನು ನೀಡುವ ಯಾವುದೇ ಯೋಜನೆಯನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಅನುಷ್ಠಾನಗೊಳಿಸುತ್ತಿಲ್ಲ. |
| ಇ. | ರಾಜ್ಯ ಸರ್ಕಾರ "ರಾಷ್ಟ್ರೀಯ ಬಾಲವಾಡಿ ಯೋಜನೆ" (National Creche Scheme) ಯನ್ನು ರಾಜ್ಯದಲ್ಲಿ ಜಾರಿಗೆ ತಂದಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು). | "ರಾಷ್ಟ್ರೀಯ ಬಾಲವಾಡಿ ಯೋಜನೆ" (National Creche Scheme) ಯನ್ನು ಈ ಮೊದಲು ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮಂಡಳಿಯು ಅನುಷ್ಠಾನಗೊಳಿಸುತ್ತಿದ್ದು, ದಿನಾಂಕ:01-01-2017 ರಿಂದ ಸದರಿ ಯೋಜನೆಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ನೀಡಲಾಗಿರುತ್ತದೆ.<br><br>ತಾಯಂದಿರು ಕೆಲಸಕ್ಕೆ ಹೋದ ಸಮಯದಲ್ಲಿ 6 ತಿಂಗಳಿಂದ 3 ವರ್ಷದ ಮಕ್ಕಳನ್ನು ಸುರಕ್ಷಿತವಾಗಿ ನೋಡಿಕೊಳ್ಳುವುದು ಯೋಜನೆಯ ಉದ್ದೇಶವಾಗಿದೆ.<br><br>ಈ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆ ಯಾಗಿದ್ದು, ಕೇಂದ್ರ ಸರ್ಕಾರ 60%, ರಾಜ್ಯ ಸರ್ಕಾರ 30% ಹಾಗೂ |

| | | |
|---|---|---|
| | | ಸ್ವಯಂಸೇವಾ ಸಂಸ್ಥೆ 10% ಪಾಲದಾರಿಕೆಯೊಂದಿಗೆ ಅನುಷ್ಠಾನ ಗೊಳಿಸಲಾಗುತ್ತಿದೆ.<br><br>ಪ್ರಸ್ತುತ ರಾಜ್ಯದಲ್ಲಿ 544 ಶಿಶು ಪಾಲನಾ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ವಿವರವನ್ನು ಅನುಬಂಧದಲ್ಲಿ ಒದಗಿಸಲಾಗಿರುತ್ತದೆ. |
| ಈ | ಈ ಯೋಜನೆ ಅಡಿಯಲ್ಲಿ ನೀಡಬೇಕಾಗಿರುವ ಸಹಾಯಧನ ನೀಡುವಲ್ಲಿ ವಿಳಂಬ ಆಗಿರುವುದರಿಂದ ಮತ್ತು ಅಸ್ತಿತ್ವದಲ್ಲಿ ಇಲ್ಲದೆ ರಾಜ್ಯದಲ್ಲಿ ಹಲವಾರು ಬಾಲವಾಡಿ ಶಾಲೆಗಳು ಮುಚ್ಚಿ ಹೋಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಕ್ರಮ ಕೈಗೊಳ್ಳಲಾಗುವುದೇ? (ಸಂಪೂರ್ಣ ಮಾಹಿತಿ ನೀಡುವುದು). | ಕಳೆದ ಸಾಲಿನಲ್ಲಿ 591 ಶಿಶು ಪಾಲನಾ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಿದ್ದವು. ಪ್ರಸಕ್ತ ಸಾಲಿನಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಅಸಮರ್ಪಕ ಕಾರ್ಯ ನಿರ್ವಹಣೆಯಿಂದ 47 ಶಿಶು ಪಾಲನಾ ಕೇಂದ್ರಗಳು ಸ್ಥಗಿತಗೊಂಡಿರುತ್ತದೆ.<br>ಏಪ್ರಿಲ್ 2020 ರಿಂದ ಕೋವಿಡ್-19ರ ಪ್ರಯುಕ್ತ ಶಿಶುಪಾಲನಾ ಕೇಂದ್ರಗಳು ಕಾರ್ಯನಿರ್ವಹಿಸುತ್ತಿಲ್ಲ. |

**ಸಂಖ್ಯೆ: ಕಾಇ 54 ಎಲ್‌ಇಟಿ 2021**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

ಅನುಬಂಧ

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:575)

| Districtwise details of crèches | | |
|---|---|---|
| SL.No. | Name of District | No of Creches |
| 1 | Bangalore(u) | 8 |
| 2 | Belgaum | 112 |
| 3 | Bellary | 7 |
| 4 | Bidar | 29 |
| 5 | Bijapur | 70 |
| 7 | Chamnarajnagara | 11 |
| 8 | Chitradurga | 45 |
| 9 | Chickmagaluru | 10 |
| 10 | Chikkaballaopur | 2 |
| 11 | Davanagere | 43 |
| 12 | Dharwad` | 15 |
| 13 | Gadag | 20 |
| 14 | Gulbarga | 8 |
| 15 | Hassan | 4 |
| 16 | Haveri | 8 |
| 17 | Karwar | 18 |
| 18 | Kolar | 12 |
| 19 | Mandya | 31 |
| 20 | Dakshina kannada | 3 |
| 21 | Mysore | 39 |
| 22 | Madikeri | 2 |
| 23 | Raichur | 16 |
| 24 | Shivmogga | 29 |
| 25 | Tumkuru | 2 |
| | **Total** | **544** |